# ರ್ಯಾಗಿಂಗ್ ಸಾರುವ ಸಂದೇಶ: 'ಬಂದುದಕ್ಕೆಲ್ಲ ತಗ್ಗಿ ನಡೆದರೆ ಭವಿಷ್ಯ ಚೆನ್ನ'

**ರ್ಯಾಗಿಂಗ್ ಕುರಿತು ೨೧-೨-೮೨ ರ 'ದೀನಬಟಿಗೆ' ಯಲ್ಲಿ ಒಂದು ಪರಿಚಯಾತ್ಮಕ ಲೇಖನ ಓದಿದ್ದೀರಿ. ಮೇಲು ನೋಟಕ್ಕೆ ಇದೊಂದು ವಿಶೇಷ ಅರ್ಥವಿಲ್ಲದ, ಆಕಸ್ಮಿಕವಾಗಿ ಹುಟ್ಟಿಕೊಂಡ ಪ್ರವೃತ್ತಿಯಂತೆ ಕಾಣಬಹುದು. ಆದರೆ ಇದರ ಆಳದಲ್ಲಿ ಒಂದು 'ತತ್ವ' ಇದೆ; "ಸಂಕೇತ" ಇದೆ, ಎನ್ನುತ್ತಾರೆ ಮೈಸೂರಿನ ಖ್ಯಾತ ಸಸ್ಯವಿಜ್ಞಾನಿ ಡಾ. ಎ. ರಾಮಲಿಂಗಂ.**

ಮೆಡಿಕಲ್ ಮತ್ತು ಇಂಜನೀಯರಿಂಗ್ ಕೋರ್ಸುಗಳಿಗೆ ಸೇರುವುದು ಅವು ಹಣ ಸಂಪಾದಿಸಲು ಒಳ್ಳೆಯ ಡಿಗ್ರಿ ನೀಡುತ್ತವೆಂದೇ. ವಿಚಾರಶೀಲ ಮತ್ತು ಮಾನವೀಯ ಗುಣಗಳನ್ನು ಹೊಂದಿದ ಡಾಕ್ಟರುಗಳು ಮತ್ತು ಇಂಜನಿಯರುಗಳು ತಯಾರಾದರೆ ಅವರು ಸಮಾಜಕ್ಕೆ ವರವಾಗುತ್ತಾರೆ. ಆದರೆ ಭ್ರಷ್ಟಾಚಾರ ಮತ್ತು ರಾಕ್ಷಸತ್ವ ತುಂಬಿದ ಡಾಕ್ಟರು ಮತ್ತು ಇಂಜನೀಯರುಗಳು ತಯಾರಾದರೆ ಅವರು ಸಮಾಜಕ್ಕೆ ಮಹಾ ಮಾರಿಗಳಾಗುತ್ತಾರೆ.

ಈಗಿನ ವೃತ್ತಿ ಶಿಕ್ಷಣ ಕೋರ್ಸುಗಳು ಹೆಚ್ಚುಕಮ್ಮಿ ದುಷ್ಟರನ್ನು ಉತ್ಪತ್ತಿ ಮಾಡುವುದಕ್ಕೇ ರೂಪಿಸಲ್ಪಟ್ಟಿವೆಯೆಂದು ಅನ್ನಿಸುತ್ತದೆ. ಮರಳಿನಿಂದ ಸರಕಾರಿ ಕಟ್ಟಡಗಳನ್ನು ಕಟ್ಟಿಸಿ ದುಡ್ಡು ನುಂಗಿ ಅವು, ಮೈಸೂರಿನಲ್ಲಿರುವ ರೀಜನಲ್ ಕಾಲೇಜ್ ಆಫ್ ಎಜ್ಯುಕೇಶನ್‌ನ ಕಾವೇರಿ ಹಾಸ್ಟಲಿನ ಹಾಗೆ ೨೦ ವರ್ಷವೂ ಮುಗಿಯುವ ಮುಂಚೆಯೇ ಕುಸಿದು ಬಿದ್ದಿರುವುದನ್ನು ನಾವು ನೋಡಿದ್ದೇವೆ. ಸರ್ಕಾರಿ ಗೂಂಡಾಗಳಿಂದ ಹತ್ಯೆಗೊಳಗಾದ ಸಮಾಜ ಸೇವಕನು ಸಹಜ ಹೃದಯಾಘಾತದಿಂದ ಸತ್ತಿದ್ದಾರೆಂದು ಸರ್ಟಿಫಿಕೇಟ್‌ಗಳನ್ನು ನೀಡುತ್ತಿರುವುದನ್ನು ನಾವು ನೋಡುತ್ತಿದ್ದೇವೆ.

ಇಂಥ ದುಸ್ವರ್ತನವನ್ನು ತುಂಬಲು ನಡೆಯುವ ಪ್ರಥಮ ಪ್ರಯತ್ನವೇ ರ್ಯಾಗಿಂಗ್.

**ಡಾ|| ಎ. ರಾಮಲಿಂಗಂ**
ಅಧ್ಯಕ್ಷ,
ಕರ್ನಾಟಕ ವಿಚಾರವಾದಿ ಒಕ್ಕೂಟ.

ಭ್ರಷ್ಟ, ಲಂಪಟ, ಕಪಟತನಕ್ಕೆ ತಲೆ ಬಾಗಿಸುವವರಿಗೆ ಒಳ್ಳೆ ಭವಿಷ್ಯವಿದೆಯೆಂದು ತೋರಿಸುವುದೇ ರ್ಯಾಗಿಂಗ್. ಸಹ ಮಾನವರ ನೋವನ್ನು ನಗುತ್ತ ನೋಡುವ, ಖುಷಿ ಪಡುವ ಅದನ್ನು ಹಣವನ್ನಾಗಿ ಪರಿವರ್ತಿಸಿಕೊಳ್ಳುವ ಮನೋಭಾವ ಬೆಳೆಸುವ ಮೊದಲ ಹೆಜ್ಜೆಯೇ ರ್ಯಾಗಿಂಗ್. ಮೆಡಿಕಲ್ ಮತ್ತು ಇಂಜನೀಯರಿಂಗ್ ಕಾಲೇಜುಗಳಲ್ಲಿರುವ ಕೆಲವು ದುಷ್ಟ ಪ್ರಾಧ್ಯಾಪಕರೇ ತಮ್ಮ ವಿದ್ಯಾರ್ಥಿಗಳನ್ನು ನಾಯಿ, ಹಂದಿಗಳಿಗಿಂತ ಹೀನವಾಗಿ ನೋಡುವುದುಂಟು. ಕನ್ನಡಿ ಮುಂದೆ ನಿಲ್ಲು ಅಂದರೆ ನಿಲ್ಲಬೇಕು; ಪ್ರಾಧ್ಯಾಪಕ ಹೇಳಿದ ಹಾಗೆ 'ಅದರಲ್ಲಿ ಏನು ನೋಡುತ್ತಿದ್ದೀ? ಎಂದರೆ 'ನಾಯಿಯನ್ನು' ಎಂದು ಹೇಳಬೇಕು. ಇಲ್ಲದಿದ್ದರೆ ಈ ಜನ್ಮದಲ್ಲೇ ಡಾಕ್ಟರು ಡಿಗ್ರಿ ಬರುವುದಿಲ್ಲ. ಇಂತಹ ಸ್ಥಿತಿಗೆ ಒಳಗಾದ ವಿದ್ಯಾರ್ಥಿ ತಲೆ ಬಾಗಿಸಿ ಮುಂದುವರೆದು ಹಿರಿಯನಾಗಿ ತನ್ನ ದುಷ್ಟ ಬುದ್ಧಿಯನ್ನು ಕಿರಿಯರ ಮೇಲೆ ತೋರಿಸುತ್ತಾನೆ. ಈ ವಿಧವಾಗಿ ತಲೆ ಬಾಗಿಸುವವನಿಗೆ ಒಳ್ಳೆಯ ಭವಿಷ್ಯವಿದೆಯೆಂಬ ಪದ್ಧತಿಯನ್ನು ಮುಂದುವರಿಸುತ್ತಾನೆ. ಮುಕ್ತ ವಾತಾವರಣದಿಂದ ಬಂದ ವಿದ್ಯಾರ್ಥಿಗೆ ಇದು ವಿಪರೀತ.

ಬಳ್ಳಾರಿ ಮೆಡಿಕಲ್ ಕಾಲೇಜಿನಲ್ಲಿ ಹಿರಿಯ ವಿದ್ಯಾರ್ಥಿನಿಯರು ಕಿರಿಯ ವಿದ್ಯಾರ್ಥಿನಿಯೊಬ್ಬಳನ್ನು ರಾತ್ರಿಯ ಚಳಿಯಲ್ಲಿ ನಗ್ನವಾಗಿ ಮುನಿಸಿಪಲ್ ಈಜು ಕೊಳದಲ್ಲಿ ಈಜಿಸಿ ಚಿತ್ರಹಿಂಸಾನಂದವನ್ನು ಅನುಭವಿಸಿದ್ದಾರೆಂದು ಪತ್ರಿಕೆಗಳಲ್ಲಿ ಓದಿದ್ದೇವೆ. ದಾವಣಗೆರೆ ಮೆಡಿಕಲ್ ಕಾಲೇಜಿನಲ್ಲಿ ಹೇಳುವುದಕ್ಕೂ ಹೇಯವಾದ ಚಿತ್ರಹಿಂಸೆಗೆ ಗುರಿಯಾದ ಗಣೇಶಬಾಬು ಆತ್ಮಹತ್ಯೆ ಮಾಡಿಕೊಂಡಿದ್ದಾರೆಂಬುದನ್ನೂ ಪತ್ರಿಕೆಯಲ್ಲಿ ಓದಿದ್ದೇವೆ.

**ಸೊಂಟ ಮುರಿಯಿರಿ!**

ಈ ಪರಿಸ್ಥಿತಿಯಲ್ಲಿ ಸಿಕ್ಕಿರುವವರು ದಯವಿಟ್ಟು ಈಜಬೇಡಿ, ಸಾಯಬೇಡಿ, ತಲೆ ತಗ್ಗಿಸಬೇಡಿ. ಸಾಯುವುದರಿಂದ ಸಮಸ್ಯೆಯನ್ನು ಎತ್ತಿ ತೋರಿಸಿದಂತಾದರೂ ದುಷ್ಟರ ಮೇಲ್ಮೈಯನ್ನು ಪ್ರಶ್ನಿಸಿದಂತಾಗುವುದಿಲ್ಲ. ಪ್ರತಿಯಾಗಿ ಅವನು ಇನ್ನೂ ಬಲಿಷ್ಠನಾಗಲು ನೀವೇ ಕಾರಣವಾಗುತ್ತೀರಿ. ವಿಚಾರಶೀಲ, ಮಾನವೀಯ ಮೌಲ್ಯಗಳು ತುಂಬಿದ ವ್ಯವಸ್ಥೆಗಾಗಿ– **ನಿಮ್ಮನ್ನು ರ್ಯಾಗ್ ಮಾಡುವವರ ಸೊಂಟ ಮುರಿಯಿರಿ.**

ಇಂತಹ ಸಮಾಜ ಶಸ್ತ್ರ ಚಿಕಿತ್ಸೆಯಿಂದ ನೀವು ನಿಮ್ಮನ್ನಲ್ಲದೆ ನಿಮ್ಮ ಸಹ ಮಾನವರಿಗೂ ಸೇವೆ ಮಾಡುತ್ತೀರಿ, ಚಿತ್ರಹಿಂಸಾನಂದವನ್ನು ಅನುಭವಿಸಲು ರೂಢಿಯಾದ ಡಾಕ್ಟರನ ಕೈಯಿಂದ ರೋಗಿಗಳನ್ನು ರಕ್ಷಿಸುತ್ತೀರಿ. ಎಲ್ಲಕ್ಕೂ ಮಿಗಿಲಾಗಿ ಮಾನವ ಮಾನವನಾಗಿರಲು ಸಹಾಯ ಮಾಡುತ್ತೀರಿ. ※

# ತುಂಟಗಾಳಿ ಸುಂಟರಗಾಳಿ

**ಕಂ. ಕ. ಕೃಷ್ಣಮೂರ್ತಿ.**

[ಕಳೆದ ವಾರ ಕೊಪ್ಪದ ಕಾಲೇಜಿನಲ್ಲಿ ವಿಚಿತ್ರವಾದೊಂದು ಸುಂಟರಗಾಳಿ ಎದ್ದು, ಹತ್ತಿಪ್ಪತ್ತು ಹೆಂಚು ಕೆಡವಿ 'ಪುಂಡಾಟ' ನಡೆಸಿತು. ತರಗತಿಗಳು ನಡೆಯುತ್ತಿದ್ದ ನಡು ಮಧ್ಯಾಹ್ನದ ಸಮಯವಾದರೂ ಯಾರಿಗೂ ಅಪಾಯವಾಗಲಿಲ್ಲ. ಇಂಥದೇ ಸುಂಟರಗಾಳಿಯೊಂದು ಗತಿಕಾಲದಲ್ಲೊಮ್ಮೆ ಇದೇ ಹೊತ್ತಿನಲ್ಲಿ ಬೀಸಿ, ಕಟ್ಟಡದ ಇದೇ ಭಾಗದಲ್ಲಿ ಹೀಗೇ ಹಂಚು ಉದುರಿಸಿದ್ದನ್ನು ಕಾಲೇಜಿನ 'ಹಳೆಯ ವಿದ್ಯಾರ್ಥಿ'ಯೊಬ್ಬರು ಜ್ಞಾಪಿಸಿಕೊಂಡರು.

ಈ ಹಿನ್ನೆಲೆಯಲ್ಲಿ, ನಿಮಗೆ ಈಗಾಗಲೇ ಪರಿಚಿತನಾಗಿರುವ ಕಿರಿಯ ಲೇಖಕ, ಪ್ರಥಮ ಪಿಯುಸಿ ವಿದ್ಯಾರ್ಥಿ ಕಂ.ಕ.ಕೃ ಗೀಚಿಕೊಟ್ಟ ಲೇಖನ ಇದು.]

ಬೇಸಿಗೆಯ ಬಿಸಿಲಿಗೆ ಗಾಳಿ ಮೃದುವಾಗಿ ಮೈ ಸೋಂಕಿದಾಗ ಹಾಯೆನಿಸುತ್ತದೆ. ಸಂಜೆಯಲ್ಲಿ "ನಡೆದು ಹೋಗುವಾಗ" ಗಾಳಿ ಜೋರಾಗಿ ಬೀಸಿದಷ್ಟೂ ಆನಂದ. ಶಾಂತವಾಗಿರುವ ಈ ಗಾಳಿಯ ಬಗ್ಗೆ ನಮಗೆ ಬಹು ನಿರ್ಲಕ್ಷ್ಯ. ಮಾನವನ ಈ ಅವಿವೇಕಕ್ಕೆ ಗಾಳಿ ಒಮ್ಮೊಮ್ಮೆ ತನ್ನ ಪ್ರತಾಪ ತೋರಿಸಿ ಬಿಸಿ ಮುಟ್ಟಿಸುತ್ತದೆ. ತಾನಿದ್ದೇನೆಂದು ಆರ್ಭಟಿಸುತ್ತದೆ. ಸಣ್ಣಗೆ ಶುರುವಾದ ಸುಂಟರ ಗಾಳಿಯೊಂದು ನಮ್ಮ ಕಾಲೇಜಿನಲ್ಲಿ ನಡೆಸಿದ ಪುಂಡಾಟವೇ ಗಾಳಿಯು ತನ್ನ ಪ್ರಚಂಡ ಅಸ್ತಿತ್ವವನ್ನು ತೋರಿಸಿಕೊಟ್ಟದ್ದಕ್ಕೆ ಸಾಕ್ಷಿ.

ಅಂದು ನಮ್ಮ ಕಾಲೇಜಿನ ಅಂಗಳದಲ್ಲಿ ಸುಳಿಗಾಳಿಯೊಂದು ಸುತ್ತಾಡುತ್ತಿತ್ತು. ಧೂಳು, ಎಲೆಗಳನ್ನು ತಿರ್‍ರನೆ ಮೇಲಕ್ಕೆರಚಿ ತನ್ನ ತುಂಟಾಟ ಶುರು ಮಾಡಿತು. ಈ ಎಲ್ಲಾ ತುಂಟಾಟವೂ ಅಷ್ಟಾಗಿ ಯಾರ ಗಮನವನ್ನೂ ಸೆಳೆಯಲಿಲ್ಲ. ಪಾಠ ನಡೆಯುತ್ತಿದ್ದ ಸಮಯ: ವಿದ್ಯಾರ್ಥಿಗಳು ಅತ್ತ ಸ್ವಲ್ಪವೇ ಲಕ್ಷಿಸಿ ಸುಮ್ಮನಾಗುತ್ತಿದ್ದರು.

ಈ ದಿವ್ಯ ನಿರ್ಲಕ್ಷ್ಯ ಗಾಳಿಗೆ ಸಿಟ್ಟು ಬರಿಸಿರಬೇಕು. ಅದರ ಓಡಾಟ ಹೆಚ್ಚಾಯಿತು. ಹುಚ್ಚು ಹುಚ್ಚಾಗಿ ತಿರುಗುತ್ತಿತ್ತು ಹಿಂಭಾಗದಿಂದ ಕಾಲೇಜಿನ ಮುಂಭಾಗಕ್ಕೂ ನುಸುಳಿತು. ಒಮ್ಮೆಯೇ ಸಿಡಿಲು ಬಿದ್ದಂತಹ ಆರ್ಭಟ! ನಡೆಯುತ್ತಿರುವ ಪಾಠಗಳು ಒಮ್ಮೆಯೇ ಸ್ತಬ್ಧವಾದವು ಎಲ್ಲಿ ಏನಾಯಿತೆಂದು ತಕ್ಷಣವೇ ಹೇಳುವಂತಿರಲಿಲ್ಲ. ಗಾಳಿಯ ಹೊಡೆತಕ್ಕೆ ಟಪ ಟಪನೆ ಕಿಟಕಿಯ ಬಾಗಿಲುಗಳು ಹಾಕಿಕೊಂಡಿರಬಹುದೆಂದು ಬಹು ಜನ ಹೆಣೆದ ಕಲ್ಪನೆ. ಆದರೆ ಅಲ್ಲಿ ನಡೆದದ್ದೇ ಬೇರೆ. ತುಂಟ ಗಾಳಿ ಸುರ್‍ರನೆ ಚಾವಣಿ ಏರಿ ಕೆಲವು ಹಂಚುಗಳನ್ನು ಪುಡಿ–ಪುಡಿ ಮಾಡಿತ್ತು. ಚಾವಣಿಯ ಹತ್ತಿಪ್ಪತ್ತು ಹಂಚುಗಳು ಛಿದ್ರ–ಛಿದ್ರವಾಗಿ ಮಣ್ಣು ಮುಕ್ಕಿ, ನೋಡಿದರೆ ಪವಾಡವೋ ಎನ್ನುವಂತಿತ್ತು. ಬಹುಶಃ ಅಲ್ಲಿರುವ ಹಂಚುಗಳನ್ನು ಒಡೆವುದರ ಮೂಲಕ ಗಾಳಿ ತಾನು ಸಲೀಸಾಗಿ ಒಳಗೆ ಬರುವ ಅವಕಾಶ ಮಾಡಿಕೊಂಡಿರಬೇಕು.

ನಾವು ಉಸಿರಾಡುವ ಅದೃಶ್ಯ ಗಾಳಿ ಕಾಣದ ಕೈಯಾಗಿ ಅದ್ಭುತ ಪವಾಡಗಳನ್ನು ಸೃಷ್ಟಿಸುತ್ತದೆಂಬುದು ಅನೇಕರಿಗೆ ಆಗ ತಿಳಿಯಿತು.

ತಣ್ಣನೆಯ ಮಂಜುಳನಾದದಲ್ಲಿ ಶಾಂತವಾಗಿ ಹರಿಯುವ ನದಿ ಒಮ್ಮೊಮ್ಮೆ ಸೊಕ್ಕೇರಿ ಹರಿಯುತ್ತದೆ. ಮಾನವನ ಬಳಕೆಗಾಗಿ ಅವನ ಕೈ ಹಿಡಿತದಲ್ಲಿರುವ ಬೆಂಕಿ ಕೈ ಜಾರಿದಾಗ ವಿನಾಶಕಾರಿಯಾಗಿ ಕೆಲಸ ಮಾಡುತ್ತದೆ. ಗಾಳಿ ಸಮಾಧಾನವಾಗಿ ಬೀಸುತ್ತದೆ, ಮೈಗೆ ಹಿತವಾಗುತ್ತದೆ, ಒಮ್ಮೊಮ್ಮೆ ಬಿರುಗಾಳಿಯೂ ಆಗುತ್ತದೆ. ಹಸಿರನ್ನು ಅಂಕುರಿಸುವ ಮಳೆ ಅತಿರೇಕವಾಗಿಯೂ ಬೀಳುತ್ತದೆ.

ಪ್ರಕೃತಿಯಲ್ಲಿ ಸಹಜವಾಗಿ ನಡೆಯುವ ಈ ಅಗೋಚರ ಕ್ರಿಯೆಗಳು, ಪ್ರಕೃತಿಯ ಈ ಸಹಜ ತುಡುಗು ಕ್ರಿಯೆಗಳು ಮೂಢ

(ಇನೆ ಪುಟಕ್ಕೆ)

## ರೋಹಿಣಿ

ತಿರುಗಿ ಬಾ ರೋಹಿಣಿ
ನೀ ತಿರುಗಿ ಬಾ
ತಿರುಗುವ ಭೂಮಂಡಲವ
ತಿರು ತಿರುಗಿ ಬಾ
ಗಗನದಾಳಕೆ ನೆಗೆದು
ಅಕ್ಕ ಪಕ್ಕದ ದೇಶಗಳ ಇಣುಕಿ
ನಕ್ಕವರ ಸೊಕ್ಕಿಳಿಸಿ ಮೈ ಬೆಳೆಸಿ ಬಾ
ನವ್ಯ ವಿಜ್ಞಾನಿಗಳ ಹಿರಿದಾಸೆಯನು
ಕರಗಿಸದೆ ಬೆಂಬಲಿಸಿ ಬಾ
ಭಾರತೀಯ ಭೂತ ಕಾಲದ ಇತಿಹಾಸದ ಪುಟಗಳೆತ್ತಿ
ಜೊತೆಯವರ ಕೂಟದಲಿ ಸೊಕ್ಕಿನಲಿ ತಲೆಯೆತ್ತಿ
ಸರಿ ನಿಮಗೆ ನಾವೆಂಬ ವಿಶ್ವಾಸವ ಬೀರುತ್ತ ಬಾ
ಭಾರತೀಯ ಪುತ್ರರು ತಿರುಪೆ ಬೇಡುವರೆಂಬ
ಭ್ರಮೆಯಿದ್ದ ನೆರೆಯವರ ಕಣ್ ತೆರೆಸಿ ಬಾ
ಜ್ಞಾನ–ವಿಜ್ಞಾನ ಆಹಾರ ನೀಡಿಸಿ
ಸರ್ವತೋಮುಖ ಶಕ್ತಿ ಸರ್ವರಲಿ ಬೆಳೆಸಿ
ಸಂಪನ್ನ ರಾಷ್ಟ್ರದಲಿ ಸ್ವಾತಂತ್ರ್ಯ ಮೊಳಗಿಸಿ
ಏಳ್ಗೆ ಹೊಂದುವ ಕನಸ ನನಸಾಗಿಸುತ ಬಾ
ಬಾರೆ ಬಾ ರೋಹಿಣಿ, ಭೂ ಮಂಡಲವ
ಒಮ್ಮೆ ಮತ್ತೊಮ್ಮೆ ತಿರುಗಿ ಬಾ

**ಎಸ್. ವಿಜಯ ಕುಮಾರ್.**

## ಓದುಗರ ಪತ್ರ

# ಸಣ್ಣ ರೈತರ ಪಾಡು: ಒಂದು ಪ್ರಾಯೋಗಿಕ ಸಲಹೆ

ಅಯ್ಯಾ,

ಇಂದಿನ ಅಭಾವ ಪರಿಸ್ಥಿತಿಯಲ್ಲಿ "ರೈತ, ಅವನು ಸತ್ತ" ಎನ್ನುವ ಗಾದೆಗೆ ಬಂದಿದೆ. ಏಕೆಂದರೆ ಕೃಷಿ ಇಲಾಖೆ ಹೇಳುತ್ತಿದೆ- "ಉತ್ಪತ್ತಿ ಜಾಸ್ತಿಯಾಗಲು ಹಸಿರೆಲೆ ಗೊಬ್ಬರವನ್ನು ಹೆಚ್ಚೆಚ್ಚು ಬಳಸಿರಿ ಹಾಗೂ ಬೆಳೆದುದನ್ನು ರಕ್ಷಿಸಿರಿ ಎಂದು. ಆದರೆ ಸಣ್ಣ, ಅತೀ ಸಣ್ಣರೈತ ಹಸಿರೆಲೆ ಗೊಬ್ಬರಕ್ಕಾಗಿ ಹಾಗೂ ಬೇಲಿ ಹಾಕಲು ಬೇಕಾದ ಸಾಮುಗ್ರಿಗಾಗಿ ಕಾಡಿಗೆ ಹೋಗಲು ಕಾನೂನಿನ ಅಡ್ಡಿಯಾಗಿದೆ. ಅವನ ಗುಡಿಸಲು ಸರಿಪಡಿಸಲು ಹಾಗೂ ಉರುವಲಿಗಾಗಿ ಎಲ್ಲಕ್ಕೂ ಅವನ ಜಮೀನಿನ ಸಮೀಪವೇ ಇರುವ ಕಾಡಿಗೆ ಹೋಗಲು ಅರಣ್ಯ ಕಾನೂನು ಅಡ್ಡಿ. ಇದಕ್ಕೆ ಒಂದು ಪರಿಹಾರ ಕೊಡಿಸುವಲ್ಲಿ, ರಾಜ್ಯ ರೈತಸಂಘ, ಕೃಷಿ ಮಂತ್ರಿ, ಅರಣ್ಯ ಮಂತ್ರಿ, ಮುಖ್ಯಮಂತ್ರಿ, ಆಯಾ ಮಂತ್ರಿಗಳ ಇಲಾಖಾ ಮುಖ್ಯಾಧಿಕಾರಿಗಳು ಒಟ್ಟಾಗಿ ಸಭೆ ಸೇರಿ ಮಲೆನಾಡ ಹಳ್ಳಿಗಳಲ್ಲಿ ಬದುಕುವ ಸಣ್ಣ ಹಾಗೂ ಅತೀ ಸಣ್ಣ ರೈತರನ್ನು ಉದ್ಧಾರ ಮಾಡಿರಿ ಎಂದು ಸಂಬಂಧ ಪಟ್ಟವರಲ್ಲಿ ಕೋರಿಕೆ.

ಸಾಮಾನ್ಯವಾಗಿ ಕಾನೂನನ್ನು ರೂಪಿಸುವಾಗ ಇಡೀ ರಾಜ್ಯಕ್ಕೆ ಸಂಬಂಧಪಟ್ಟಂತೆ ಕಾನೂನು ಜಾರಿ ಮಾಡಿದಲ್ಲಿ, ಪಟ್ಟಣದ ವಾಸಿಗಳಿಗೆ ಸ್ವಲ್ಪ ಮಟ್ಟಿಗಾದರೂ ಅನುಕೂಲ ವಾಗುತ್ತದೆ. ಆದರೆ ಅದೇ ಕಾನೂನು ಗ್ರಾಮಾಂತರ ಪ್ರದೇಶದ ರೈತನಿಗೆ ಅನಾನುಕೂಲವೇ ಸರಿ. ಇದಕ್ಕಾಗಿ ನನ್ನ ಒಂದು ಸಣ್ಣ ಸಲಹೆಯನ್ನು ಸೂಚಿಸುತ್ತೇನೆ. ಗ್ರಾಮಾಂತರ ಪ್ರದೇಶದ ರೈತನಿಗೆ-5 ಅಂಶದ ಸೂತ್ರವನ್ನು:

1). ಹಸಿರೆಲೆ ಗೊಬ್ಬರದ ಅನುಮತಿ-
2). ಬೇಲಿ ಹಾಕಲು ಬೇಕಾದ ಸಾಮುಗ್ರಿಗಾಗಿ
3). ಗುಡಿಸಲು ರಿಪೇರಿಗಾಗಿ ಸಾಮುಗ್ರಿ-
4). ಅರಣ್ಯದಲ್ಲಿ ಬಿದ್ದಿರುವ ಒಣ ಸೌದೆಯನ್ನು ತಲೆ ಹೊರೆಯಲ್ಲಿ ತರುವರೇ.
5). ಕಾಡು ಮಣ್ಣಿಗಾಗಿ.

ಯಾವ ತರದ ಕಾನೂನಿನ ಅಡ್ಡಿಯಾಗದಂತೆ ಸ್ವತಂತ್ರವಾಗಿ ಉತ್ಪಾದಿಸಲು ಅನುಮತಿ ಕೊಡಬೇಕು. ರಾಜ್ಯ ಮಟ್ಟದಲ್ಲಿ ಸಾಧ್ಯವಾಗದಿದ್ದರೆ ವಲಯ ಮಟ್ಟದಲ್ಲಿ ಆಯಾ ಪ್ರದೇಶಕ್ಕನುಗುಣವಾಗಿ ವಲಯಾಧಿಕಾರಿಗಳಿಗೆ ಅನುಮತಿ ಕೊಡಬೇಕು.

—ಎಂ. ನರಹರಿ.

ಕುದುರೆಗುಂಡಿ ೫೭೭ ೧೨೭

## ಜನತಾ ಕಾಲೊನಿ ಒದಗಿಸಿ

'ದೀವಟಿಗೆ' ಸಂಪಾದಕರಿಗೆ-

ಮಾನ್ಯರೇ,

ಶೃಂಗೇರಿ ತಾಲ್ಲೂಕ್ ಗಂಡಘಟ್ಟ ಗ್ರಾಮದ ಎಡಗೋಡಿಗೆಯಲ್ಲಿರುವ ಹರಿಜನ ಕುಟುಂಬದವರು ಜನತಾ ಕಾಲೋನಿ ಕೇಳಿದ್ದು ಇಲ್ಲಿಯವರೆಗೆ (ಮೂರು ವರ್ಷದಿಂದ) ಜಾಗ ಮಂಜೂರಾಗದೆ ಮನೆ ಕಟ್ಟಲು ಸಾಧ್ಯವಾಗದೆ ತುಂಬಾ ತೊಂದರೆ ಪಡುತ್ತಿದ್ದಾರೆ. ಸಂಬಂಧಪಟ್ಟ ಅಧಿಕಾರಿಗಳನ್ನು ಹಲವಾರು ಸಾರಿ ಭೇಟಿ ಮಾಡಿದಾಗ್ಯೂ ಅವರಿಂದ ಬರುವ ಉತ್ತರ "ನಾಳೆ" ಎಂದು. ಹಾಗಾದರೆ ಆ ಬಡ ನಿವಾಸಿಗಳಿಗೆ ಮನೆಯ ಅವಶ್ಯಕತೆ ಇಲ್ಲವೇ? ಸಂಬಂಧಪಟ್ಟವರು ಇತ್ತ ಗಮನ ಹರಿಸುತ್ತಾರೆಯೇ?

—ಎಂ. ಕೃಷ್ಣಾಚಾರ್,
ಉಪಾಧ್ಯಕ್ಷ
ಮರ್ಕಲ್ ಗ್ರಾಮ ಪಂಚಾಯ್ತಿ.

**ಈ ಪತ್ರದ ಮುಖ್ಯಾಂಶವನ್ನು ನಕಲು ಮಾಡಿ, ಫೆ. ೮ ರಂದು ಶೃಂಗೇರಿ ತಹಸೀಲ್ದಾರರಿಗೆ ಕಳಿಸಿದ್ದೆವು. "ಪತ್ರದಲ್ಲಿ ತಿಳಿಸಿರುವಂತೆ ಸಮಸ್ಯೆ ಇರುವುದು ನಿಜವೆ. ನಿಜವಾಗಿದ್ದಲ್ಲಿ ಅದರ ಪರಿಹಾರಕ್ಕಾಗಿ ನಿಮ್ಮ ಕಚೇರಿಯಿಂದ ಯಾವ ಕ್ರಮ ತೆಗೆದುಕೊಳ್ಳಲಾಗಿದೆ/ತೆಗೆದುಕೊಳ್ಳಲು ಉದ್ದೇಶಿಸಲಾಗಿದೆ, ಅದಕ್ಕೆ ಎಷ್ಟು ಸಮಯ ಬೇಕಾಗಬಹುದು ಈ ಮಾಹಿತಿಗಳನ್ನು ದಯವಿಟ್ಟು ಒದಗಿಸಿದರೆ ಪತ್ರ, ಉತ್ತರ ಎರಡನ್ನೂ ಒಟ್ಟಿಗೆ ಪ್ರಕಟಿಸಲಾಗುವುದು. ಫೆ. ೧೩ ರೊಳಗೆ ಉತ್ತರಿಸಿದರೆ ತುಂಬ ಅನುಕೂಲ" ಎಂದು ತಿಳಿಸಿದ್ದೆವು.**

**ಅವರಿಂದ ಈವರೆಗೂ ಉತ್ತರ ಬಂದಿಲ್ಲ.**

**—ಸಂಪಾದಕ.**

## ವಾಹನ ಸಂಚಾರಕ್ಕೆ ಅಡ್ಡಿ

ಮಾನ್ಯರೆ,

ಇಂದಿನ ಯುಗದಲ್ಲಿ ಮುಂದುವರಿದ ಮಾನವರು 'ವನಸಂಹಾರ' ಮಾಡಹತ್ತಿದ್ದಾರೆ. ಇರಬಹುದು. ಆದರೆ ಇದರಿಂದ ಬೇರೆ ಜನರಿಗೆ ತೊಂದರೆ ಆಗದ ಹಾಗೆ ನೋಡಿಕೊಳ್ಳುವುದು ಒಳಿತು ಅಲ್ಲವೆ?

ಕೊಪ್ಪದಿಂದ ತೀರ್ಥಹಳ್ಳಿಗೆ ಹೋಗುವ ಮಾರ್ಗದಲ್ಲಿ ಸಿಗುವ "ಕ್ಲಾಸಿಕ್ ಪ್ಲಾಂಟೇಷನ್" ನವರು ಬೃಹತ್ತು ಕಾಫಿ ತೋಟ ಮಾಡಲು ಪ್ರಾರಂಭಿಸಿ, ತಮ್ಮ ಕಾಡಿನ ಮರಗಳನ್ನು ಕಡಿಯಲು ಶುರು ಮಾಡಿದ್ದಾರೆ. ಆದರೆ ರಸ್ತೆ ಬದಿಯ ಮರಗಳನ್ನು ಕಡಿದಾಗ ಅವು ರಸ್ತೆಗೆ ಬೀಳುವುದರಿಂದ ವಾಹನ ಸಂಚಾರಕ್ಕೆ ಅಡ್ಡಿಯಾಗುತ್ತಿದೆ. ರಸ್ತೆ ಪಕ್ಕದಲ್ಲಿರುವ ಮರಗಳನ್ನು ಕಡಿಯುವಾಗ ಮುಂಜಾಗ್ರತೆಯಾಗಿ ಮರಗಳ ಹರೆಗಳನ್ನು ಮೊದಲು ಕಡಿದುಕೊಳ್ಳಬಹುದು. ಅಥವಾ ಜಾಸ್ತಿ ಜನ ಇಟ್ಟುಕೊಳ್ಳುವುದರಿಂದ ಬಿದ್ದ ಮರಗಳನ್ನು ಬಹಳ ಬೇಗ ತುಂಡರಿಸಿ ರಸ್ತೆ ಬಿಡಿಸಬಹುದು. ಇದನ್ನು ಬೇರೆಯವರು ಹೇಳಬೇಕೆ? ಸಾರ್ವಜನಿಕರಿಗೆ ತೊಂದರೆ ಆಗುವುದನ್ನು ಅರಿಯುವುದು ಯಾವಾಗ? ಜೊತೆಗೆ ಕೇವಲ ೩-೪ ಜನರಿಂದ ಇಂತಹ ಮರಗಳನ್ನು ಕಡಿದು ದಾರಿ ಬಿಡಿಸುವುದು ಸಾಮಾನ್ಯವೇ? ಬಂದ ವಾಹನಗಳು ಇವರು ಎಷ್ಟು ಹೊತ್ತಿಗೆ ಮುಗಿಸುತ್ತಾರೆ ಎಂಬುದನ್ನು ಘಂಟೆಗಟ್ಟಲೆ ಕಾಯುತ್ತಿರಬೇಕಾಗುತ್ತದೆ.

ಇಂಥ ಒಂದು ಅಡಚಣೆ ಫೆ. ೨೫ ರಂದು ನಡೆಯಿತು. ಅವತ್ತು ಕೊಪ್ಪ-ತೀರ್ಥಹಳ್ಳಿ 'ಟೌನ್ ಸರ್ವಿಸ್' ಬಸ್ಸು ಸುಮಾರು ೧ ಗಂಟೆ ಕಾಲ ನಿಲ್ಲಬೇಕಾಯಿತು.

ಬಸ್ಸು ಮುಂತಾದವುಗಳಲ್ಲಿ ಶಾಲಾ ವಿದ್ಯಾರ್ಥಿಗಳು, ಅನಾರೋಗ್ಯದಿಂದ ನರಳುತ್ತಿರುವವರು ಇರುತ್ತಾರೆ. ಅವರಿಗೆ ಇದರಿಂದ ಆಗುವ ತೊಂದರೆ ಎಷ್ಟೆಂದು ಹೇಳಬೇಕಾಗಿಲ್ಲ.

**ಆದ್ದರಿಂದ, ಇನ್ನು ಮೇಲಾದರೂ ಮರ ಕಡಿಯುವಾಗ ಇಂಥ ನಿಧಾನವಾಗುವುದನ್ನು ತಪ್ಪಿಸಲಿ. ಇವರ ಮೇಲಧಿಕಾರಿಗಳು ಅಥವಾ ಸಂಬಂಧಪಟ್ಟ ಮುಖ್ಯಸ್ಥರು ಸ್ವತಃ ತಾವೇ ಬಂದು ಇಂತಹ ಕೆಲಸಗ**ಳನ್ನು ಮಾಡಿಸಿ, ಸಾರ್ವಜನಿಕರಿಗೆ ತೊಂದರೆ ಆಗದ ಹಾಗೆ ನೋಡಿಕೊಳ್ಳಲಿ, ಎಂಬುದಕ್ಕಾಗಿ ಈ ಪತ್ರ ಬರೆದಿದ್ದೇನೆ.

ಸಾರ್ವಜನಿಕರ ಪರವಾಗಿ,

—ಮನೋಜ್ ಶಿವಪುರ

[ಈ ವಿಷಯದ ಸತ್ಯಾಂಶ ತಿಳಿಯಲು ನಮ್ಮ ಪ್ರತಿನಿಧಿ ಸ್ಥಳಕ್ಕೆ ಹೋದಾಗ ಎರಡು ಅಪಾಯಕರ ದೃಶ್ಯಗಳು ಕಂಡುಬಂದವು. (i) ರಸ್ತೆಯ ಒಂದು ಮಗ್ಗುಲಿಗೆ ದರೆ, ಇನ್ನೊಂದು ಕಡೆ ಹೊಂಡ. ದರೆಯ ಕಡೆಯಿಂದ ಬಿದ್ದ ಮರದ ಗೆಲ್ಲುಗಳ ತುದಿಯನ್ನು ಸವರಿ, ಒಂದು ವಾಹನ ಜಾಗ್ರತೆಯಿಂದ ಹೋಗುವಷ್ಟು ಮಾತ್ರ ಜಾಗ ಬಿಡಿಸಲಾಗಿದೆ. ಇದು ರಾತ್ರಿಯ ಹೊತ್ತಲ್ಲಂತೂ ಬಹಳ ಅಪಾಯಕಾರಿಯಾಗುವ ಸಂಭವ ಇದೆ. (ii) ಒಂದು ದೊಡ್ಡ ಮರ ಕಡಿದದ್ದು ರಸ್ತೆ ಬದಿಯ ಇನ್ನೊಂದು ದೊಡ್ಡ ಮರದ ಮೇಲೆ ಅಪ್ಪಳಿಸಿದೆ. ಇದರಿಂದಾಗಿ ಅದರ ಕೆಲವು ದೊಡ್ಡ ಹರೆಗಳು ಹಿಸಿದು ನೇತಾಡುತ್ತಿವೆ; ಯಾವಾಗ ಬೇಕಾದರೂ ರಸ್ತೆಯ ಮೇಲೆ ಅಪ್ಪಳಿಸಬಹುದಾಗಿದೆ.

ಸಂಬಂಧ ಪಟ್ಟವರು ಈ ಅಂಶಗಳನ್ನು ಗಮನಿಸುತ್ತಾರೆಂದು ಆಶಿಸುತ್ತೇವೆ.—ಸಂ. ]

---

## ತುಂಬೆ ಗಾಳಿ....ಸುಂಟರಗಾಳಿ

ನಂಬಿಕೆ ಇರುವ ಜನರಿಗೆ ದೆವ್ವ-ಭೂತವಾಗಿ ಕಾಣಿಸುತ್ತದೆ. ವೈಜ್ಞಾನಿಕ ದೃಷ್ಟಿ ಆಲೋಚನಾಶಕ್ತಿಗಳ ಅಭಾವವಿರುವಾಗ ಮಾನವನ ಪ್ರಶ್ನೆಗೆ ಮೂಡಿದ್ದೆಲ್ಲಾ ತನ್ನ ಅಜ್ಞಾನ ಮುಸುಕಿದ ಮನೋಭಾವನೆಗೆ ತಕ್ಕಂತೆ ಮೌಢ್ಯದ ಸುಳ್ಳು ಆರೋಪಕ್ಕೆ ಒಳಗಾಗುತ್ತವೆ. ಪ್ರಕೃತಿಯ ಇಂತಹ ತುಡುಗು ಕ್ರಿಯೆಗಳು ಜೀವ ಹಾನಿಯನ್ನೂ ತರಬಹುದು. ಮೂಢ ನಂಬಿಕೆ ಇರುವ ಜನ ಇದನ್ನೇ 'ದೆವ್ವ' [ಗಾಳಿ ದೆವ್ವ] ಎನ್ನುತ್ತಾರೆಯೇ?

—ಕೆಂ. ಕೆ. ಕೃ

---

## ಉರಿಸುವ ಮಾತು

**ದೊಡ್ಡ ಅಂಡಿನ ಕೆಲರು ವೇದಿಕೆಗೆ**
**ಕೂತು**
**ಕಡಿಕಡಿದು ಗುಡ್ಡಗಳ ಹಾಕಿದರು ಕಟ್ಟೆ,**
**ದೀಪ ಉರಿಸುವ ಮಾತು; ಉರಿಸಿದರು**
**ಹೊಟ್ಟೆ,**
**ಬಿಲ್ಲು, ಕೇವಣ ಕಟ್ಟಿ ಜನರೆಲ್ಲ ಚಟ್ಟೆ!**

**—ನಕ್ಷತ್ರಿಕ**

## ಕನ್ನಡ ನದಿ

ದ್ರವಿಡಸ್ತೋತ್ರಯಲಿ ಹುಟ್ಟಿ
ಹರಿಯುತದು ಗುಪ್ತಗಾಮಿನಿಯಾಗಿ
ಬೆಳೆಯುತದು ಸ್ವಯಂಪ್ರಭೆಯಾಗಿ
ಕರಾವಳಿಯ ಮಡಿಲಲ್ಲಿ
ಮಲೆನಾಡಿನಿಳಿಜಾರಿನಲಿ
ಬೆಳವಲದ ಸಿರಿಯಲ್ಲಿ
ಮತ್ತೆ ಅಲ್ಲಿ-ಇಲ್ಲಿ
ಹೇಗೆ ಹರಿದಿದೆ ನೋಡು ಗೆಳೆಯಾ.

ಅಲ್ಲಲ್ಲಿ ನದಿ ಮಧ್ಯ
ಕಲೆ-ವಿಜ್ಞಾನ ದಿನ್ನೆಗಳ ಮೇಲೆ
ಕಂಗೊಳಿಸುತ್ತಿವೆ ಕಿಕ್ಕಿರಿದು
ಪರ ದೇಶದ ಶಬ್ದ ಪಕ್ಷಿಗಳು
ನಿರ್ಮಿಸಿವೆ ಚಿಲಿಪಿಲಿಗುಟ್ಟುತ್ತ
ಭಾಷೆಯೊಳಗೇ ರಂಗವಿಟ್ಟು.

ಜೀವನದಿಗೆ ಅಭರಣವಾಗಿ
ಬೆಳೆದು ನಿಂತಿವೆ ದಂಡೆಗುಂಟ
ಉರ್ದು-ಮರಾಠಿ-ತೆಲುಗು
ತಮಿಳು-ಮಲಿಯಾಳಿ-ತುಳು
ಕೊಂಕಣಿಯ ಹೆಚ್ಚ ಹಸಿರು

ಕವಿ ಕೃತಿಗಳೆಲ್ಲ ಅಣೆಕಟ್ಟುಗಳಾಗಿ
ಬೇಕೆನಿಸಿದಷ್ಟು ವಿದ್ಯುತ್ ವಿಚಾರ
ಜ್ಞಾನದ ಬೆಳಗೆ ಸಾಕೆನಿಸುವಷ್ಟು
ನೀರು.

ಹೆಚ್ಚಿರಬಹುದು ನದಿಯ ಉದ್ದಗಲ
ಸಂಸ್ಕೃತದ ಸತತ ಮಳೆಯಿಂದ
ಮೂಲ ಸೆಲೆಯನ್ನು ಹುಡುಕು
ಬರಿ ಕನ್ನಡ-ಕನ್ನಡ-ಕನ್ನಡ

—ರಂಜಾನ್ ದರ್ಗಾ
ಸೌಜನ್ಯ: ಆಂದೋಲನ,
ಮೈಸೂರು.

## ಜಗ ಜಾರುತಿದೆ

ತತ್ವಗಳ ಬದಿಗಿಟ್ಟು
ಧರ್ಮಗಳ ಕೈಬಿಟ್ಟು
ದೇವ, ದೇವರು ಸೃಷ್ಟಿಸಿ
ಹೋರಾಟವ ಹುಟ್ಟಿಸಿ
ಜಗ ಜಾರುತಿದೆ ಇಂದು

ಭಕ್ತಿಯು ತಿಳಿಯದೆ
ಯುಕ್ತಿಯೂ ಇಲ್ಲದೆ,
ಶಕ್ತಿಯು ಹಮ್ಮಲಿ
ಮುಕ್ತಿಯು ಕಾಣದೆ
ಜಗ ಜಾರುತಿದೆ ಇಂದು

ಒಟ್ಟಿಗೆ ಬಾಳದೆ
ಬಟ್ಟೆಯ ಗಟ್ಟುತ,
ಜಾತಿಯ ಕೋತಿಯು
ಮತ-ಮತ ಹಾಯುತ
ಜಗ ಜಾರುತಿದೆ ಇಂದು

ಮಾತೆಯ ಮಮತೆಯು
ಮರೆತಿದು ಎಲ್ಲರೂ
ದ್ರೋಹಕೆ, ದಮನ!
ಮಾತೆಯ ಕಣ್ಣೀರು!
ಜಗ ಜಾರುತಿದೆ ಇಂದು

—ಸ್ವಾಮಿ ಸೋಮಲಾಪುರ.

## ಕೊಪ್ಪ ತಾ॥ ಶಾಲಾಭಿವೃದ್ಧಿ ಸಮಿತಿಗಳ ಮತ್ತು ಶಿಕ್ಷಕರ ಸಮ್ಮೇಳನ

ಜಯಪುರ: ಕೊಪ್ಪ ತಾ॥ ಶಾಲಾಭಿವೃದ್ಧಿ ಸಮಿತಿಗಳ ಮತ್ತು ಶಿಕ್ಷಕರ ಸಮ್ಮೇಳನ ಇಲ್ಲಿ ಮಾರ್ಚ್ ೨ ರಂದು ನಡೆಯಿತು.

ಶಿಕ್ಷಣ ಇಲಾಖೆಯ ಉಪನಿರ್ದೇಶಕ ಕೆ. ಕೆ. ಆನಂದ ಅವರ ಅಧ್ಯಕ್ಷತೆಯಲ್ಲಿ, ಮುಖ್ಯ ಅತಿಥಿಗಳಾದ ಶೃಂಗೇರಿ ಕಾಲೇಜಿನ ರೀಡರ್ ಎ. ಕೆ. ಭಟ್ ಸಮ್ಮೇಳನವನ್ನು ಉದ್ಘಾಟಿಸಿದರು.

ಕೊಪ್ಪ ತಾ॥ಅ॥ಮಂ॥ ಅಧ್ಯಕ್ಷ ಬಿ. ಜಿ. ಚಿನಂಬರ್‌ರವರ ಅಧ್ಯಕ್ಷತೆಯಲ್ಲಿ ನಡೆದ ಮುಕ್ತಾಯ ಸಮಾರಂಭದಲ್ಲಿ ಗ್ರಾಮೀಣ ಅಭಿವೃದ್ಧಿ ಮಂತ್ರಿ ಬೇಗಾನೆ ರಾಮಯ್ಯ ಸಮಾರೋಪ ಭಾಷಣ ಮಾಡಿದರು. ಉತ್ತಮ ಶಿಕ್ಷಕರು ಮತ್ತು ಶಾಲಾಭಿವೃದ್ಧಿ ಸಮಿತಿಗಳನ್ನು ಪಿ. ಜಿ. ಗುರ್ಜರ್ ಸನ್ಮಾನಿಸಿದರು.

ಸಮ್ಮೇಳನದ ಅಂಗವಾಗಿ ವಿಚಾರ ಗೋಷ್ಠಿ ಮತ್ತು ಶೈಕ್ಷಣಿಕ ವಸ್ತು ಪ್ರದರ್ಶನಗಳನ್ನು ಏರ್ಪಡಿಸಲಾಗಿತ್ತು.

### ವಾರ್ಷಿಕೋತ್ಸವ

ಅದೇ ಸಂಜೆ ಇಲ್ಲಿನ ಮಾದರಿ ಹಿರಿಯ ಪ್ರಾಥಮಿಕ ಶಾಲೆಯ ವಾರ್ಷಿಕೋತ್ಸವ ಗ್ರಾಮ ಪಂಚಾಯಿತಿ ಅಧ್ಯಕ್ಷ ಎ. ಸಿ. ವಡ್ರಪ್ಪನವರ ಅಧ್ಯಕ್ಷತೆಯಲ್ಲಿ ನಡೆಯಿತು ಹೇರೂರು ಗ್ರಾಮ ಪಂಚಾಯಿತಿ ಅಧ್ಯಕ್ಷ ಚಂದ್ರಯ್ಯ ಹೆಗ್ಗಡೆ ಬಹುಮಾನ ವಿನಿಯೋಗ ಮಾಡಿದರು. ಸಹಾಯಕ ಶಿಕ್ಷಣಾಧಿಕಾರಿ ಎಂ. ಚಂದ್ರಶೇಖರಯ್ಯ ಮುಖ್ಯ ಅತಿಥಿಗಳಾಗಿದ್ದರು.

ಶಾಲೆಯ ಮಕ್ಕಳಿಂದ ನಾಟಕ ಮತ್ತಿತರ ಮನರಂಜನೆ ಕಾರ್ಯಕ್ರಮ ನಡೆಯಿತು.

## ಶೃಂಗೇರಿಯಲ್ಲಿ ಆರೆಸ್ಸೆಸ್‌ನ ವಾರ್ಷಿಕೋತ್ಸವ

(ನಮ್ಮ ಪ್ರತಿನಿಧಿಯಿಂದ)

ಶೃಂಗೇರಿ: ಫೆ. ೨೫ರಂದು ನಡೆದ ಇಲ್ಲಿನ ರಾ. ಸ್ವ. ಸಂಘದ ವಾರ್ಷಿಕೋತ್ಸವದಲ್ಲಿ ಸಂಘದ ಅಖಿಲ ಭಾರತ ಪ್ರಚಾರ ಪ್ರಮುಖ ಮೋರೋಪಂತ ಪಿಂಗಳೆ ಭಾಗವಹಿಸಿದ್ದರು.

ತಮ್ಮ ಭಾಷಣದಲ್ಲಿ "ದೇಶದಲ್ಲಿ ಇಂದು ಅಶಿಸ್ತು ಎಲ್ಲೆಡೆಯೂ ತಾಂಡವವಾಡುತ್ತಿದೆ ಸಂಘ ಶಿಸ್ತಿಗೆ ಹೆಚ್ಚು ಮಹತ್ವ ಕೊಡುತ್ತದೆ. ಪ್ರತಿಯೊಬ್ಬರೂ ಶಿಸ್ತಿಗೆ ಪ್ರಾಧಾನ್ಯ ಕೊಟ್ಟಾಗ ದೇಶದ ಪ್ರಗತಿಯಾಗುತ್ತದೆ" ಎಂದ ಅವರು, "ಅಸ್ಪೃಶ್ಯತೆ ನಾವು ಮಾಡಿರುವ ದೊಡ್ಡ ತಪ್ಪು. ಅದನ್ನು ಹೋಗಲಾಡಿಸಲು ನಾವು ಕಂಕಣಬದ್ಧರಾಗಬೇಕು" ಎಂದರು. ಮೊದಲಿಗೆ ಸ್ವಯಂಸೇವಕರ ಶಿಸ್ತಿನ ಮೆರವಣಿಗೆ ನಡೆಯಿತು.

## ಜನಾಭಿಪ್ರಾಯ ಮುಖಂಡರ ತರಬೇತಿ ಶಿಬಿರಗಳು

ಹಾಲ್ಮತ್ತೂರು: ಕೊಪ್ಪ ಪ್ರಾಥಮಿಕ ಆರೋಗ್ಯ ಕೇಂದ್ರ, ಕಮ್ಮರಡಿ ಮತ್ತು ಭಂಡಿಗಡಿಗಳ ಪ್ರಾ. ಆ. ಘಟಕಗಳ ಸಂಯುಕ್ತ ಆಶ್ರಯದಲ್ಲಿ ಜನಾಭಿಪ್ರಾಯ ಮುಖಂಡರ ತರಬೇತಿ ಶಿಬಿರ ಫೆ. ೨೬ರಂದು ಇಲ್ಲಿ ಹೆಚ್. ವೈ. ಸೀತಾರಾಮ ಭಟ್ಟರ ಅಧ್ಯಕ್ಷತೆಯಲ್ಲಿ ನಡೆಯಿತು.

ತಾ॥ಅ॥ಮಂ॥ ಸದಸ್ಯ ಹೆಚ್. ಕೆ. ಕೊಲ್ಲಪ್ಪಗೌಡ ಕಾರ್ಯಕ್ರಮ ಉದ್ಘಾಟಿಸಿದರು. ಕೊಪ್ಪ ತಹಸೀಲ್ದಾರ್ ಹೆಚ್. ಎಮ್. ನಾಗಪ್ಪ ಮುಖ್ಯ ಅತಿಥಿಗಳಾಗಿದ್ದರು. ಡಾ. ಆರ್. ಜೆ. ರಂಗನಾಥನ್, ಡಾ. ಮಲ್ಲಿಕಾರ್ಜುನಯ್ಯ, ಡಾ. ಮುನಿರಾಜ್ ಅವರುಗಳು ಭಾಷಣ ಮಾಡಿದರು.

ಬಿ. ವಿ. ಕೇಶವಮೂರ್ತಿ ಸ್ವಾಗತಿಸಿದರು. ಎಂ. ಎನ್. ರಾಮಚಂದ್ರ ವಂದಿಸಿದರು.

### ಹೇರೂರಿನಲ್ಲಿ

ಗ್ರಾಮ ಪಂಚಾಯಿತಿ ಅಧ್ಯಕ್ಷ ಚಂದ್ರಯ್ಯ ಹೆಗ್ಡೆಯವರ ಅಧ್ಯಕ್ಷತೆಯಲ್ಲಿ ನಡೆದ ಕಾರ್ಯಕ್ರಮವನ್ನು ಕೊಪ್ಪ ತಾ॥ ಅ॥ಮಂಡಳಿ ಉಪಾಧ್ಯಕ್ಷೆ ಶ್ರೀಮತಿ ಹೆಚ್. ಎಸ್. ಸುಮಿತ್ರಮ್ಮ ಉದ್ಘಾಟಿಸಿದರು. ಡಾ. ಆರ್. ಜೆ. ರಂಗನಾಥನ್, ಮುಖ್ಯ ಅತಿಥಿಗಳಾಗಿದ್ದ ಡಾ. ಟಿ. ಜನಾರ್ದನ್ ಮತ್ತು ಹೆಚ್. ರಾಮಚಂದ್ರ ಅವರುಗಳು ವಿವಿಧ ವಿಷಯಗಳ ಬಗ್ಗೆ ಮಾತನಾಡಿದರು.

ಎ. ಕೆ. ಚಿದಂಬರಯ್ಯ ಸ್ವಾಗತಿಸಿದರು. ಎಂ. ಎನ್. ರಾಮಚಂದ್ರ ವಂದಿಸಿದರು.

## ವಾರ್ಷಿಕೋತ್ಸವಗಳು

### ಶೃಂಗೇರಿ ಸಾರ್ವಜನಿಕ ವಿ. ನಿಲಯ

ಶೃಂಗೇರಿಯ ಸಾರ್ವಜನಿಕ ಹಿಂದುಳಿದ ಜನಾಂಗದ ಬಾಲಕರ ವಿ. ನಿಲಯದ ವಾರ್ಷಿಕೋತ್ಸವ ಫೆ. ೨೬ ರಂದು ದೇಶ್ಪಾಂಡೆ ನಾಯಕ್‌ರ ಅಧ್ಯಕ್ಷತೆಯಲ್ಲಿ ನೆರವೇರಿತು. ಮೈಸೂರು ಬ್ಯಾಂಕಿನ ಮ್ಯಾನೇಜರ್ ಅತಿಥಿಗಳಾಗಿದ್ದರು. ಚಿಕ್ಕಣ್ಣಾಚಾರ್ ವೃಂದದವರಿಂದ ಹಾರ್ಮೋನಿಯಂ ಕಾರ್ಯಕ್ರಮವಿತ್ತು.

### ಕಿರಿಯ ಪ್ರಾಥಮಿಕ ಶಾಲೆ

ಶೃಂಗೇರಿಯ ಕಿರಿಯ ಪ್ರಾಥಮಿಕ ಬಾಲಕ ಬಾಲಕಿಯರ ಶಾಲೆಯ ವಾರ್ಷಿಕೋತ್ಸವ ಫೆ. ೨೬ ರಂದು ನಡೆಯಿತು. ಅ. ವಿ. ಬಾ. ಪ್ರೌಢ ಶಾಲೆಯ ಮುಖ್ಯೋಪಾಧ್ಯಾಯ ಕೆ. ಎಸ್. ಬಾಲಕೃಷ್ಣ ಅಧ್ಯಕ್ಷರು, ಲೋಕೋಪಯೋಗಿ ಇಲಾಖೆಯ ಅ॥ ಇಂಜನಿಯರ್ ಸೋಮಶೇಖರ್ ಅತಿಥಿಗಳಾಗಿದ್ದ ಸಭೆಯಲ್ಲಿ ಶ್ರೀಮತಿ ಶೈಲ ರತ್ನಾಕರ್ ಬಹುಮಾನ ಹಂಚಿದರು. ಮಕ್ಕಳಿಂದ ನಾಟಕ, ಮನರಂಜನೆ ಕಾರ್ಯಕ್ರಮ ನಡೆದವು.

## ಮಾ. ೧೫ ರಂದು ಲೋ. ಇಲಾಖೆ ನೌಕರರ ಧರಣಿ

ಕೊಪ್ಪ: ಲೋಕೋಪಯೋಗಿ ಇಲಾಖೆ ಕೆಲಸಗಾರರಿಗೆ ಕನಿಷ್ಟ ಕೂಲಿಯನ್ನು ಕೂಡಲೇ ಜಾರಿಮಾಡಬೇಕೆಂದು ಒತ್ತಾಯಿಸಲು ಜಿಲ್ಲಾ ಲೋಕೋಪಯೋಗಿ ಕೆಲಸಗಾರರ ಸಂಘದ ಸದಸ್ಯರು ಎಲ್ಲಾ ತಾಲೂಕುಗಳ ಅಸಿಸ್ಟೆಂಟ್ ಎಕ್ಸಿಕ್ಯುಟಿವ್ ಇಂಜನಿಯರ್ ಕಚೇರಿಗಳ ಮುಂದೆ ಮಾ. ೧೫ ರಂದು ಧರಣಿ ಮುಷ್ಕರ ನಡೆಸಲು ನಿರ್ಧರಿಸಿರುವುದಾಗಿ ಸಂಘದ ಉಪಾಧ್ಯಕ್ಷ ರಾಮಚಂದ್ರ ತಿಳಿಸಿದ್ದಾರೆ.

## ಮತದಾರರ ಪಟ್ಟಿ ಪರಿಷ್ಕರಣ

ಕೊಪ್ಪ: ಮತದಾರರ ಪಟ್ಟಿಯಲ್ಲಿ ಹೆಸರನ್ನು ಸೇರ್ಪಡಿಸಲು ೧-೧-೮೨ ಕ್ಕೆ ೨೧ ವರ್ಷ ತುಂಬಿದವರೆಲ್ಲ ಅರ್ಹರಾಗುತ್ತಾರೆ. ಈಗ ತಯಾರಿಸಿರುವ ಪಟ್ಟಿಯನ್ನು ತಾ॥ ಕಚೇರಿ, ಚಿಕ್ಕಮಗಳೂರು ಉಪವಿಭಾಗಾಧಿಕಾರಿ ಮತ್ತು ೧೫೨ ಶೃಂಗೇರಿ ವಿ.ಸ. ಕ್ಷೇತ್ರದ ನಿರ್ವಚನಾಧಿಕಾರಿ, ಎಲ್ಲ ಗ್ರಾಮ ಪಂಚಾಯಿತಿಗಳು ಮತ್ತು ಪುರಸಭೆಗಳಲ್ಲಿ ಪ್ರಚಾರಪಡಿಸಲಾಗಿದ್ದು, ಈ ಸಂಬಂಧ ಹಕ್ಕು ಸ್ಥಾಪನೆ ಅಥವಾ ಆಕ್ಷೇಪಣೆಗಳೇನಾದರೂ ಇದ್ದರೆ, ಸಂಬಂಧಪಟ್ಟ ೬,೭, ಅಥವಾ ೮ ರ ನಮೂನೆಗಳಲ್ಲಿ ಮೇಲಿನ ಯಾವುದೇ ಕಛೇರಿಯ ನಿಯೋಜಿತ ಅಧಿಕಾರಿಗೆ ೧೬-೩-೮೨ ರೊಳಗಾಗಿ ಸಲ್ಲಿಸಬಹುದಾಗಿದೆ.

## ಗಜಾನನ ಯುವಕ ಸಂಘ, ಕೆಸನೆ.

ಕೊಪ್ಪ ತಾ॥ ಕೆಸನೆಯ ಗಜಾನನ ಯುವಕ ಸಂಘದ ವಾರ್ಷಿಕೋತ್ಸವ ಫೆ. ೨೫ ರಂದು ನಡೆಯಿತು. ಪಂಚಾಯ್ತಿ ಅಧ್ಯಕ್ಷ ಕೆ. ಎಸ್. ಶಾಂತಾರಾಂ ಅಧ್ಯಕ್ಷತೆ ವಹಿಸಿದ್ದರು. ಹೆಚ್. ಜಿ. ಗೋವಿಂದೇಗೌಡ, ಕೆ. ಸುಂದರನಾಯಕ್, ಜಿ. ಎಸ್. ಶ್ರೀನಿವಾಸ, ಮತ್ತು ಎಂ. ಚಂದ್ರಶೇಖರಯ್ಯ ಅತಿಥಿಗಳಾಗಿದ್ದರು. ಹೆಚ್. ಎಸ್. ಕಳಸಪ್ಪ ಸ್ವಾಗತಿಸಿದರು. ಹೆಚ್. ಪಿ. ರಾಮಪ್ಪ ವರದಿ ಓದಿದರು. ಕೆ. ಎಸ್. ಸತ್ಯನಾರಾಯಣ ವಂದಿಸಿದರು.

## ಸ್ಕೌಟ್‌ಗೈಡ್ ಸಂಸ್ಥಾಪಕರ ದಿನಾಚರಣೆ

ಕೊಪ್ಪದ ಸಂತ ಜೋಸೆಫರ ಬುಲ್ ಬುಲ್ ಮತ್ತು ಗೈಡ್ ದಳಗಳಿಂದ ಸ್ಕೌಟ್ ಗೈಡ್ ಸಂಸ್ಥಾಪಕರ ದಿನಾಚರಣೆ ಫೆ. ೨೧ ರಂದು ನಡೆಯಿತು. ಶ್ರೀಮತಿ ಜಯಶ್ರೀ ಎಂ. ಶೆಟ್ಟಿಯವರ ಅಧ್ಯಕ್ಷತೆಯಲ್ಲಿ ಶ್ರೀಮತಿ ರೋಹಿಣಿ ವಿ. ಭಟ್. ಶಿಬಿರಾಗ್ನಿ ಉದ್ಘಾಟಿಸಿದರು. ದಳಗಳಿಂದ ಆಕರ್ಷಕ ವಿವಿಧ ವಿನೋದಾವಳಿ ಕಾರ್ಯಕ್ರಮವಿತ್ತು.

## ಕ್ರೀಡಾಕೂಟಗಳ ಫಲಿತಾಂಶಗಳು

ಶೃಂಗೇರಿ: ಇಲ್ಲಿನ ಶಾರದಾ ಸ್ಪೋರ್ಟ್ಸ್ ಕ್ಲಬ್ ಆಶ್ರಯದಲ್ಲಿ ಫೆ. ೨೫ ರಂದು ನಡೆದ ಅಂತಿಮ ಕ್ರಿಕೆಟ್ ಪಂದ್ಯದಲ್ಲಿ ಆತಿಥೇಯ ಕ್ಲಬ್‌ನ 'ಎ' ತಂಡದವರು ಕೊಪ್ಪದ ಅರುಣೋದಯ 'ಎ' ತಂಡದ ಮೇಲೆ ಜಯಗಳಿಸಿದರು.

ಫ್ಲಾಷ್ ಅಸೋಸಿಯೇಷನ್ ಆಶ್ರಯದಲ್ಲಿ ಈಚೆಗೆ ನಡೆದ ಕ್ರೀಡಾಕೂಟದ ಫಲಿತಾಂಶಗಳು: ಶಟಲ್‌ಕಾಕ್ ಡಬಲ್ಸ್-ಜೆ. ಸಿ. ಬಿ. ಎಂ. ಕಾಲೇಜು 'ಎ' ತಂಡ, 'ಲಾಮ್ ಕೈ ಹ್ವಾಟ್ ಪಾರ್ಟಿ'; ಬಾಲ್ ಬ್ಯಾಡ್‌ಮಿಂಟನ್ ಫೈವ್ಸ್- ಹರಿಹರಪುರದ ಶಾರದಾ ಸ್ಪೋರ್ಟ್ಸ್ ಕ್ಲಬ್, ಬೇಗಾರು ಶ್ರೀರಾಂ ಟೀಂ; ಥ್ರೋಬಾಲ್- ಜೆ. ಸಿ. ಬಿ. ಎಂ. ಕಾಲೇಜು, ಜಾಲಿಫ್ರೆಂಡ್ಸ್ (ಶೃಂಗೇರಿ)

ಹರಿಹರಪುರದಲ್ಲಿ ಫೆ. ೨೭, ೨೮ ರಂದು ನಡೆದ ಬಾಲ್ ಬ್ಯಾಡ್‌ಮಿಂಟನ್ ಫೈವ್ಸ್ ಜಿಲ್ಲಾ ಮಟ್ಟದ ಕೂಟದಲ್ಲಿ ಬೀರೂರಿನ ಕನ್ನಡ ಯುವಕಸಂಘ ಮೊದಲನೆಯ ಮತ್ತು ಬಾಳೆಹೊನ್ನೂರು ತಂಡ ೨ನೆಯ ಪ್ರಶಸ್ತಿ ಪಡೆದರು.

## ಹೊಸ ಶಾಲೆ ಉದ್ಘಾಟನೆ.

ಕಿಗ್ಗ: ಇದೇ ಹೋಬಳಿಯ ಕೆ. ಮಸಿಗೆ (ತಲವಂತಿ)ಯಲ್ಲಿ ಮಾ. ೧ ರಂದು ಹೊಸ ಶಾಲೆಯ ಉದ್ಘಾಟನೆ ನಡೆಯಿತು. ಕೋಗಿನಬೈಲು ಶಾಲೆಯ ಉಪಾಧ್ಯಾಯ ವಿ. ಸುಬ್ರಹ್ಮಣ್ಯ ಅಧ್ಯಕ್ಷತೆ ವಹಿಸಿದ್ದರು. ಶಾಲಾ ಉಪಾಧ್ಯಾಯ ಎಸ್. ಡಿ. ಲೋಕಪ್ಪಗೌಡ ಅತಿಥಿಗಳನ್ನು ಸ್ವಾಗತಿಸಿ, ವಂದಿಸಿದರು. ಕೋಗಿನಬೈಲು ಶಾಲೆ ಮಕ್ಕಳಿಂದ ಮನರಂಜನೆ ಕಾರ್ಯಕ್ರಮ ನಡೆಯಿತು.

ಗಿರಿಜನರೇ ಹೆಚ್ಚಾಗಿ ವಾಸಿಸುವ ಸುತ್ತಮುತ್ತಲ ಹಳ್ಳಿಗಳಿಗೆ ಈ ಶಾಲೆ ಕೇಂದ್ರದಲ್ಲಿದೆ.





ಸಂಪಾದಕ, ಪ್ರಕಾಶಕ ಮತ್ತು ಮುದ್ರಕ: ಸಿರಿಮನೆ ನಾಗರಾಜ್. ಅಚ್ಚು: ನೇಸರ ಮುದ್ರಣ, ಕೊಪ್ಪ.